ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ  19ನೇ ಜುಲೈ, 2019

ಕದಲಗೆರೆಯಿಂದ ಕಾಡೇನಹಳ್ಳಿ ಗ್ರಾಮಕ್ಕೆ ಡಾಂಬರೀಕರಣ ಮಾಡುವ ಬಗ್ಗೆ

ಶ್ರೀ ಅ. ದೇವಗೌಡ (ಪದವೀಧರರ ಕ್ಷೇತ್ರ):-

373 (416) ಮಾನ್ಯ ಲೋಕೋಪಯೋಗಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) 2014-15ನೇ ಸಾಲಿನಲ್ಲಿ ಮಂಡ್ಯ ಜಿಲ್ಲೆ, ಪಾಂಡವಪುರ ತಾಲ್ಲೂಕು ಮೇಲುಕೋಟೆ ಹೋಬಳಿಯ ಕದಲಗೆರೆಯಿಂದ ಕಾಡೇನಹಳ್ಳಿ ಗ್ರಾಮಕ್ಕೆ ರಸ್ತೆ ಡಾಂಬರೀಕರಣಕ್ಕಾಗಿ ಮಂಜೂರಾದ ಹಣವೆಷ್ಟು ;

(ಆ) ಮೇಲ್ಕಂಡ ರಸ್ತೆಯ ಕಾಮಗಾರಿಯ ಕಳಪೆ ಮಟ್ಟದಿಂದ ಕೂಡಿದ್ದು ಸಂಚಾರಕ್ಕೆ ಯೋಗ್ಯವಲ್ಲದ ರೀತಿಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ರಸ್ತೆ ಡಾಂಬರೀಕರಣವನ್ನು ಯಾವಾಗ ಮಾಡಲಾಗುವುದು ;

(ಇ) 2014-15ನೇ ಸಾಲಿನಲ್ಲಿ ಡಾಂಬರೀಕರಣ ಕಾಮಗಾರಿಯಲ್ಲಿ ಅವ್ಯವಹಾರ ನಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಅವ್ಯವಹಾರ ನಡೆಸಿರುವವರ ವಿರುದ್ಧ ಯಾವ ಕ್ರಮ ಕೈಗೊಂಡಿದೆ ; ? (ಸಂಪೂರ್ಣ ವಿವರ ನೀಡುವುದು)